# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 408
**ಸದಸ್ಯರ ಹೆಸರು** : ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 10.12.2020
**ಉತ್ತರಿಸುವ ಸಚಿವರು** : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕವನ್ನು ಕಲ್ಪಿಸಲು ಸರ್ಕಾರ ಸಮಯವನ್ನು ನಿಗದಿ ಮಾಡಿದೆಯೇ; 3 ಫೇಸ್ ವಿದ್ಯುತ್ ನೀಡಲಾಗುತ್ತಿದೆಯೇ; | ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ರೈತರ ನೀರಾವರಿ ಪಂಪ್ ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ಕುರಿತು ಸರ್ಕಾರಿ ಸುತ್ತೋಲೆ ಸಂಖ್ಯೆ: ಇಎನ್/41/ವಿಎಸ್‌ಸಿ/2014/ಪಿ1 ದಿನಾಂಕ14-07-2014 ಮತ್ತು 23.01.2014 ರಂದು ಆದೇಶ ಹೊರಡಿಸಲಾಗಿದ್ದು, ಆ ಪ್ರಕಾರ ಹಣ ಪಾವತಿಸಿರುವ ಅರ್ಜಿದಾರರ ಜೇಷ್ಠತಾ ಪಟ್ಟಿ ತಯಾರಿಸಿ, ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕವನ್ನು ಕಲ್ಪಿಸಲಾಗುತ್ತಿದೆ.<br>ಕರ್ನಾಟಕ ಸರ್ಕಾರದ ಆದೇಶದನ್ವಯ ರಾಜ್ಯದ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ದಿನವಹಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ. |
| ಆ) | ರೈತರಿಗೆ ಟ್ರಾನ್ಸ್‌ಫಾರ್ಮರ್ (T.C.) ಗಳನ್ನು ಸಮರ್ಪಕವಾಗಿ ಹಾಗೂ ಶೀಘ್ರವಾಗಿ ಒದಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ರೈತರ ಕೃಷಿ ಪಂಪ್‌ಸೆಟ್‌ಗಳ ಸಕ್ರಮೀಕರಣ ಯೋಜನೆ, ಶೀಘ್ರ ಸಂಪರ್ಕ ಯೋಜನೆ, ಗಂಗಾಕಲ್ಯಾಣ ಯೋಜನೆ, ವಿಸ್ತರಣೆ ಮತ್ತು ಸುಧಾರಣೆ ಕಾಮಗಾರಿಗಳಿಗೆ ಅವಶ್ಯಕತೆ ಇರುವಲ್ಲಿ ಪರಿವರ್ತಕಗಳನ್ನು ಕೆ.ಟಿ.ಪಿ.ಪಿ. ಕಾಯ್ದೆಯಡಿ ವಿನಾಯಿತಿ ಪಡೆದಿರುವ ಸಂಸ್ಥೆಗಳಾದ ಮೆ: ಕವಿಕಾ, ಬೆಂಗಳೂರು ಮತ್ತು ಮೆ: ಎನ್.ಜಿ.ಇ.ಎಫ್, ಹುಬ್ಬಳ್ಳಿ ರವರುಗಳಿಂದ ಖರೀದಿಸಿ, ವಿದ್ಯುತ್ ಪರಿವರ್ತಕಗಳನ್ನು ಅಳವಡಿಸಿ ವಿದ್ಯುತ್ ಸಂಪರ್ಕವನ್ನು ಕಲ್ಪಿಸಲಾಗುತ್ತಿದೆ.<br>ರೈತರ ಕೃಷಿ ಪಂಪ್‌ಸೆಟ್‌ಗಳ ಪರಿವರ್ತಕಗಳು ವಿಫಲವಾದಲ್ಲಿ 72 ಗಂಟೆಯೊಳಗೆ ಜೇಷ್ಠತೆ ಮತ್ತು ಲಭ್ಯತೆ ಮೇರೆಗೆ ಬದಲಾಯಿಸಲಾಗುತ್ತಿದೆ.<br>ರಾಜ್ಯದಲ್ಲಿ ಒಟ್ಟು 157 ಸಂಖ್ಯೆಯ ಪರಿವರ್ತಕ ದುರಸ್ತಿ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿದ್ದು, ವಿಫಲವಾದ ಪರಿವರ್ತಕಗಳನ್ನು ದುರಸ್ತಿಗೊಳಿಸಿ, ಬದಲಾಯಿಸಲಾಗುತ್ತಿದೆ. ಹಾಗೂ ತಾಲ್ಲೂಕುವಾರು /ವಿಭಾಗವಾರು 191 ಸಂಖ್ಯೆಯ ಪರಿವರ್ತಕಗಳ ಬ್ಯಾಂಕ್‌ನ್ನು ಸ್ಥಾಪಿಸಲಾಗಿದ್ದು, ಅವುಗಳಲ್ಲಿರುವ ದಾಸ್ತಾನಿನ ಮುಖಾಂತರ ರೈತರ ಕೃಷಿ ಪಂಪ್ ಸೆಟ್‌ಗಳ ವಿಫಲವಾದ ಪರಿವರ್ತಕಗಳನ್ನು ಬದಲಾಯಿಸಲಾಗುತ್ತಿದ್ದು, ಇದೊಂದು ನಿರಂತರ ಪ್ರಕ್ರಿಯೆಯಾಗಿರುತ್ತದೆ. |

ಸಂಖ್ಯೆ: ಎನರ್ಜಿ 237 ಇಬಿಎಸ್ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ